# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1367

ಮಾನ್ಯ ಸದಸ್ಯರ ಹೆಸರು : ಶ್ರೀ ಕವಟಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 23.09.2021

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2005ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಕೆ.ಪಿ.ಎಸ್.ಸಿ ಯ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಆಯ್ಕೆಯಾದ ಸಹಾಯಕ/ಪ್ರಥಮ ದರ್ಜೆ ಸಹಾಯಕರುಗಳಿಗೆ ನೇಮಕಾತಿ ಪ್ರಕ್ರಿಯೆ ಮುಗಿದಿದ್ದರೂ, ನೇಮಕಾತಿ ಆದೇಶವನ್ನು ತಡವಾಗಿ 2006ರ ಏಪ್ರಿಲ್ ನಂತರ ಕೊಟ್ಟಿದ್ದರಿಂದ, ಅವರುಗಳು ಪಿಂಚಣಿ ಯೋಜನೆಯಿಂದ ವಂಚಿತ ರಾಗಿರುವುದು ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ನೌಕರರು ತಮ್ಮದು 2005ರ ಅಧಿಸೂಚನೆ ನೇಮಕಾತಿಯಾಗಿದ್ದು, ತಮಗೂ ಹಳೆ ಪಿಂಚಣಿ ಯೋಜನೆ ಜಾರಿಗೊಳಿಸಬೇಕೆಂದು ಮನವಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ದೆಹಲಿ ಉಚ್ಛ ನ್ಯಾಯಾಲಯ ಹಾಗೂ ಸರ್ವೋಚ್ಛ ನ್ಯಾಯಾಲಯಗಳು ರಿಟ್ ಸಂಖ್ಯೆ:6680/2017 ತನಕಾರಾಂ ಮತ್ತು ಇತರರು ವಿರುದ್ಧ ಭಾರತ ಒಕ್ಕೂಟ, ರಿಟ್ ಅರ್ಜಿ ಸಂಖ್ಯೆ:1358/2017 ಶ್ಯಾಮ್ ಕುಮಾರ್ ಚೌಧರಿ ಮತ್ತು ಇತರರು ವಿರುದ್ಧ ಭಾರತ ಒಕ್ಕೂಟ, ಮತ್ತು ರಿಟ್ ಅರ್ಜಿ ಸಂಖ್ಯೆ:13129/2019 ನೀರಜ್ ಕುಮಾರ್ ಸಿಂಗ್ ಮತ್ತು ಇತರರ ವಿರುದ್ಧ ಭಾರತ ಒಕ್ಕೂಟ ಪ್ರಕರಣಗಳಲ್ಲಿ ನೀಡಿರುವ ಆದೇಶಗಳನ್ವಯ ಸದರಿ ನೌಕರರಿಗೂ ಹಳೆ ಪಿಂಚಣಿ ಯೋಜನೆಯನ್ನು ಜಾರಿಗೊಳಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಸರ್ಕಾರದ ಆದೇಶ ಸಂಖ್ಯೆ: ಆಇ (ವಿ) 04 ಪಿಇಟಿ 2005, ದಿನಾಂಕ: 31.03.2006ರಲ್ಲಿ ದಿನಾಂಕ: 01.04.2006ರಂದು ಹಾಗೂ ತದನಂತರ ಸರ್ಕಾರಿ ಸೇವೆಗೆ ಸೇರುವ ಎಲ್ಲಾ ನೌಕರರಿಗೆ ನೂತನ ವ್ಯಾಖ್ಯಾನಿತ ಅಂಶದಾಯಿ ಕೊಡುಗೆ ಯೋಜನೆ ಪದ್ಧತಿಯನ್ನು ಕಡ್ಡಾಯವಾಗಿ ಜಾರಿಗೊಳಿಸಿ ಆದೇಶಿಸಲಾಗಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಆಇ 39 ಪಿಇಎನ್ 2020 (ಭಾ), ದಿನಾಂಕ: 17.02.2021 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಹುದ್ದೆಗಳಿಗೆ ಸಂಬಂಧಿಸಿದಂತೆ, ದಿನಾಂಕ:01.04.2006ರ ಪೂರ್ವದ ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಗಳ ಸಂಬಂಧದಲ್ಲಿ ದಿನಾಂಕ:01.04.2006 ಮತ್ತು ತದನಂತರದಲ್ಲಿ ಆಯ್ಕೆ ಮತ್ತು ನೇಮಕ ಹೊಂದಿ ಸೇವೆಗೆ ಸೇರಿರುವ ಅಭ್ಯರ್ಥಿಗಳ ಪ್ರಕರಣಗಳಲ್ಲಿ ಅದೇ ತಂಡದಲ್ಲಿನ ಇತರೆ ಅಭ್ಯರ್ಥಿಗಳು |

| | | |
|---|---|---|
| ಇ) | ಸದರಿ 2005ರ ಅಧಿಸೂಚನೆಯನ್ವಯ ಆಯ್ಕೆಯಾದ ನೌಕರರುಗಳಿಗೆ ದೆಹಲಿ ಉಚ್ಚ ನ್ಯಾಯಾಲಯ ಹಾಗೂ ಸರ್ವೋಚ್ಚ ನ್ಯಾಯಾಲಯಗಳು ನೀಡಿರುವ ಆದೇಶಗಳನ್ವಯ ಹಳೆ ಪಿಂಚಣಿ ಯೋಜನೆಯನ್ನು ಯಾವ ಕಾಲಮಿತಿಯಲ್ಲಿ ವಿಸ್ತರಿಸಲಾಗುವುದು; (ವಿವರ ಒದಗಿಸುವುದು) | ದಿನಾಂಕ:01.04.2006ರ ಪೂರ್ವದಲ್ಲಿಯೇ ಆಯ್ಕೆ ಮತ್ತು ನೇಮಕಾತಿಗಳು ಪೂರ್ಣಗೊಂಡು ಸೇವೆಗೆ ನೇಮಕ ಹೊಂದಿ ವರದಿ ಮಾಡಿಕೊಂಡಿರುವ ಮತ್ತು ಇದರಿಂದಾಗಿ ಡಿಫೈನ್ಡ್ ಪಿಂಚಣಿ ಯೋಜನೆಗೆ ಒಳಪಟ್ಟಿರುವ ಸಂದರ್ಭಗಳಿವೆ. ಅಂತಹ ನಿರ್ದಿಷ್ಟ ವಿಶಿಷ್ಟ ಪ್ರಕರಣಗಳನ್ನು ಮಾತ್ರ ಸರ್ಕಾರದ ಆದೇಶ ಸಂಖ್ಯೆ: ಆಇ (ವಿಶೇಷ) 04 ಪಿಇಟಿ 2005, ದಿನಾಂಕ:31.03.2006ರ ಆದೇಶದನ್ವಯ ದಿನಾಂಕ:01.04.2006 ರಿಂದ ಜಾರಿಗೊಳಿಸಲಾದ ನೂತನ ವ್ಯಾಖ್ಯಾನಿತ ಅಂಶದಾಯಿ ಕೊಡುಗೆ ಯೋಜನಾ ವ್ಯಾಪ್ತಿಯಿಂದ ಸಡಿಲಿಕೆಯನ್ನು ನೀಡಿ ಹಿಂದಿನ ಡಿಫೈನ್ಡ್ ಪಿಂಚಣಿ ವ್ಯಾಪ್ತಿಗೆ ಈ ಕೆಳಕಂಡ ಷರತ್ತಿಗೊಳಪಡಿಸಿ ಸರ್ಕಾರವು ಆದೇಶಿಸಿದೆ:-<br><br>1. ದಿನಾಂಕ:01.04.2006ರ ಹಿಂದಿನ ನೇಮಕಾತಿ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ ಆಯ್ಕೆಗೊಂಡಿರುವ ಅಭ್ಯರ್ಥಿಗಳು ಪ್ರಪ್ರಥಮವಾಗಿ ರಾಜ್ಯ ಸಿವಿಲ್ ಸೇವೆಗೆ ನೇಮಕವನ್ನು ಹೊಂದಿರತಕ್ಕದ್ದು.<br><br>2. ತದನಂತರದ ತಂಡದಲ್ಲಿ ಆಯ್ಕೆಯನ್ನು ಹೊಂದಿ ಸೇವಾ ಜೇಷ್ಠತೆಯಲ್ಲಿ ಕಿರಿಯರಾಗಿರುವವರು ಪ್ರಪ್ರಥಮವಾಗಿ ರಾಜ್ಯ ಸಿವಿಲ್ ಸೇವೆಗೆ ದಿನಾಂಕ:01.04.2006ರ ಪೂರ್ವದಲ್ಲಿ ನೇಮಕಗೊಂಡು, ತತ್ಪರಿಣಾಮವಾಗಿ ಡಿಫೈನ್ಡ್ ಪಿಂಚಣಿ ಸೌಲಭ್ಯವನ್ನು ಹೊಂದಿರತಕ್ಕದ್ದು. (ಒಂದೇ ನೇಮಕಾತಿ ಅಥವಾ ತದನಂತರದಲ್ಲಿನ ನೇಮಕಾತಿ ಪ್ರಕರಣಗಳಲ್ಲಿ, ಆತನಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾಗಿರುವವರ ಪ್ರಕರಣಗಳಲ್ಲಿ ಅವರುಗಳ ನೇಮಕಾತಿಗಳು ಹಿಂದಿನ ಡಿಫೈನ್ಡ್ ಪಿಂಚಣಿ ಯೋಜನೆಯ ವ್ಯಾಪ್ತಿಗೆ ಒಳಪಟ್ಟಿದ್ದು ಆದರೆ ಅದೇ ನೇಮಕಾತಿಗಳಿಗೆ ಒಳಪಟ್ಟಿರುವ ಯಾವುದೇ ಒಬ್ಬ ವ್ಯಕ್ತಿಯು ತದನಂತರ ದಿನಾಂಕ: 01.04.2006ರ ನಂತರದಲ್ಲಿ ಸೇವೆಗೆ ಸೇರಿರುವ ಸಂದರ್ಭದಿಂದಾಗಿ ನೂತನ ಪಿಂಚಣಿ ವ್ಯಾಪ್ತಿಗೆ ಒಳಪಡುವ ಪ್ರಕರಣಗಳು). |
| ಈ) | 2005ರ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆಯನ್ವಯ ಡಿಸೆಂಬರ್ 2005ರೊಳಗೆ ದಾಖಲಾತಿಗಳ ಪರಿಶೀಲನೆ ಮುಗಿದು ಅಂತಿಮ ಆಯ್ಕೆಪಟ್ಟಿ ಪ್ರಕಟಿಸದೇ, ನೂತನ ಪಿಂಚಣಿ ಯೋಜನೆ ಜಾರಿಯಾದ ಮೇಲೆ ನೇಮಕಾತಿ ಆದೇಶ ಹೊರಡಿಸಿದ ಪ್ರಕರಣಗಳಿಗೂ ನೂತನ ಪಿಂಚಣಿ ಯೋಜನೆ ಅನ್ವಯವಾಗುವುದೇ; ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯ ಪಡೆದು ಜಾರಿಗೊಳಿಸಲಾಗಿದೆಯೇ; ಯಾವುದೇ ಕಾನೂನು ಅಧಿಸೂಚನೆ ಹೊರಡಿಸಿದ ನಂತರ ಭವಿಷ್ಯವರ್ತಿಯಾಗಿ ಜಾರಿಗೆ ಬರಲಿದ್ದು, ನೂತನ ಪಿಂಚಣಿ ಯೋಜನೆ ಜಾರಿಗೆ ಬರುವ ಪೂರ್ವದಲ್ಲಿನ ಅಧಿಸೂಚನೆಗೂ ಇದು ಅನ್ವಯವಾಗುತ್ತದೆಯೇ? (ವಿವರ ನೀಡುವುದು) | |

ಆಇ 168 ಪಿಇಎನ್ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ